# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1292
ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ, (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 21.12.2018
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿ ಪಾರ್ಕಿಂಗ್‌ಗಾಗಿ ಮತ್ತು ನೋ-ಪಾರ್ಕಿಂಗ್‌ಗಾಗಿ ಫಲಕಗಳನ್ನು ಅಳವಡಿಸುವಲ್ಲಿ ಪೊಲೀಸ್ ಇಲಾಖಾ ವತಿಯಿಂದ ಯಾವ ಮಾನದಂಡವನ್ನು ಪಾಲಿಸಲಾಗುವುದು? | ಬೆಂಗಳೂರು ನಗರದಲ್ಲಿ ಪಾರ್ಕಿಂಗ್‌ಗಾಗಿ ಮತ್ತು ನೋ-ಪಾರ್ಕಿಂಗ್‌ಗಾಗಿ ಫಲಕಗಳನ್ನು ಅಳವಡಿಸುವಲ್ಲಿ ಪೊಲೀಸ್ ಇಲಾಖಾ ವತಿಯಿಂದ ಅನುಸರಿಸಲಾಗುವ ಮಾನದಂಡಗಳು ಈ ಕೆಳಕಂಡಂತಿವೆ.<br>**ನೋ-ಪಾರ್ಕಿಂಗ್**<br>• ಯಾವುದೇ ರಸ್ತೆಯಲ್ಲಿ ಸಂಚಾರ ದಟ್ಟಣೆ ಸದಾಕಾಲ ಕಂಡುಬರುತ್ತಿದ್ದು, ಸಾರ್ವಜನಿಕರು ವಾಹನಗಳ ನಿಲುಗಡೆಯನ್ನು ನಿಷೇಧಿಸುವ ಸಲಹೆ ಸೂಚನೆ/ದೂರುಗಳು ಪದೇ ಪದೇ ಬಂದಲ್ಲಿ ಅಥವಾ ಸುಗಮ ಸಂಚಾರ ನಿರ್ವಹಣೆಗೆ ಆ ರಸ್ತೆಯಲ್ಲಿ ಎಲ್ಲಾ ವಿದಧ ವಾಹನಗಳ ನಿಲುಗಡೆಯನ್ನು ನಿಷೇಧಿಸಬೇಕೆಂದು ಸ್ಥಳೀಯ ಸಂಚಾರ ಪೊಲೀಸ್ ಇನ್ಸ್‌ಪೆಕ್ಟರ್‌ರವರು ಸಮುಚಿತ ಮಾರ್ಗದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದಲ್ಲಿ ಅದನ್ನು ಪರಿಶೀಲಿಸಿ ಅಗತ್ಯ ಮತ್ತು ಅನಿವಾರ್ಯವೆಂದು ಕಂಡುಬಂದಲ್ಲಿ ಅಂತಹ ರಸ್ತೆಯನ್ನು ನೋ-ಪಾರ್ಕಿಂಗ್ ಜೋನ್ ಆಗಿ ಅಧಿಸೂಚನೆಯನ್ನು ಹೊರಡಿಸಲಾಗುವುದು.<br>• ವೈಜ್ಞಾನಿಕವಾಗಿ ರಸ್ತೆಯ ಧಾರಣಾ ಸಾಮರ್ಥ್ಯಕ್ಕಿಂತ ಹೆಚ್ಚಿನ ಪ್ರಮಾಣದ ವಾಹನಗಳ ಹರಿವು ಇದ್ದಾಗ(Capacity to Volume Ratio Exceeding 1) ಮತ್ತು ರಸ್ತೆಯ ಅಗಲ ಕಡಿಮೆ ಇದ್ದಾಗ ಸುಗಮ ಸಂಚಾರದ ದೃಷ್ಟಿಯಿಂದ ಅಂತಹ ರಸ್ತೆಯನ್ನು ನೋ-ಪಾರ್ಕಿಂಗ್ ರಸ್ತೆಯನ್ನಾಗಿ ಅಧಿಸೂಚನೆಯನ್ನು ಹೊರಡಿಸಲಾಗುವುದು.<br>• ಜೊತೆಗೆ ನೋ ಪಾರ್ಕಿಂಗ್ ಜಾಗವನ್ನು ತೀರ್ಮಾನಿಸುವಾಗ ಈ ಕೆಳಕಂಡ ಅಂಶಗಳನ್ನು ಗಮನಿಸಲಾಗುತ್ತದೆ.<br>1) ರಸ್ತೆಯ ವಿಧ- ಆರ್ಟೀರಿಯಲ್, ಸಬ್ ಆರ್ಟೀರಿಯಲ್, ಕಲೆಕ್ಟರ್ ಸ್ಟ್ರೀಟ್ ಇತ್ಯಾದಿ.<br>2) ರಸ್ತೆಯ ಅಗಲ – 1 ಲೇನ್, 2ಲೇನ್, ವಿಭಜಿತ ಕ್ಯಾರಿಯೇಜ್ ವೇ ಇತ್ಯಾದಿ.<br>3) ಒನ್ ವೇ/ ಟೂ ವೇ ಸ್ಟ್ರೀಟ್ಸ್<br>4) ರಸ್ತೆಯ ಮೇಲಿನ ಟ್ರಾಫಿಕ್ ವಾಲ್ಯೂಮ್.<br>5) ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸಿದ್ದಲ್ಲಿ ಕಡಿಮೆಯಾಗು ರಸ್ತೆಯ ಜಾಗ.<br>6) ಬಸ್ ನಿಲ್ದಾಣ ಮತ್ತು ಮೇಜರ್ ಜಂಕ್ಷನ್‌ಗಳಿಂದ ಇರುವ ದೂರ.<br>7) ಪಾದಚಾರಿಗಳ ಸುರಕ್ಷತೆ. |

<table>
<tr>
<td></td>
<td></td>
<td>
<u>ಪಾರ್ಕಿಂಗ್</u>
<ul>
<li>ರಸ್ತೆಯ ಮೇಲೆ ಪಾರ್ಕಿಂಗ್‌ನ್ನು ರಸ್ತೆಯ ಧಾರಣಾ ಸಾಮರ್ಥ್ಯವು 20 ರಿಂದ 25% ಗೂ ಹೆಚ್ಚಾಗಿದ್ದಲ್ಲಿ ನೀಡಲಾಗುವುದು.</li>
<li>ಐ.ಆರ್.ಸಿ. 86–1983 ರ ಪ್ರಕಾರ ವಿವಿಧ ರೀತಿಯ ರಸ್ತೆಗಳಿಗೆ ರೈಟ್ ಆಫ್ ವೇ ಈ ಕೆಳಕಂಡಂತೆ ಇರುತ್ತದೆ.<br>
1. ಆರ್ಟೀರಿಯಲ್ – 50–60 ಮೀ<br>
2. ಸಬ್ ಆರ್ಟೀರಿಯಲ್ – 30–40 ಮೀ<br>
3. ಕಲೆಕ್ಟೀವ್ ಸ್ಟ್ರೀಟ್ – 20–30 ಮೀ<br>
4. ಲೋಕಲ್ ಸ್ಟ್ರೀಟ್ಸ್ – 10–20 ಮೀ</li>
<li>ಪ್ಯಾರ್‌ಲಲ್ ಪಾರ್ಕಿಂಗ್‌ಗಿಂತ ಆಂಗ್ಯೂಲರ್ ಪಾರ್ಕಿಂಗ್ ನೀಡಲಾಗುತ್ತಿದೆ. ಇದರಿಂದ ಹೆಚ್ಚಿನ ವಾಹನಗಳನ್ನು ನಿಲ್ಲಿಸಲು ಸಾಧ್ಯವಾಗುತ್ತದೆ.</li>
<li>ಐ.ಆರ್.ಸಿ.106ರ ಪ್ರಕಾರ ಆನ್‌ಸ್ಟ್ರೀಟ್ ಪಾರ್ಕಿಂಗನ್ನು ನಿರ್ಭಂದಿಸುವಾಗ ಸದರಿ ರಸ್ತೆಯು ಯಾವ ವಿನ್ಯಾಸದಲ್ಲಿ ಮಾಡಲ್ಪಟ್ಟಿದೆ, ಎಷ್ಟು ಪ್ರಮಾಣದ ಸಂಚಾರವನ್ನು ಹೊಂದಿದೆ ಮತ್ತು ಯಾವ ಉದ್ದೇಶಕ್ಕಾಗಿ ಸದರಿ ರಸ್ತೆಯು ಬಳಕೆಯಾಗುತ್ತಿದೆ ಎಂಬ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಲಾಗುವುದು.</li>
</ul>
</td>
</tr>
<tr>
<td>ಆ)</td>
<td>ಈ ಫಲಕಗಳನ್ನು ಅಳವಡಿಸುವಾಗ ನಗರದಲ್ಲಿನ ಸಾರಿಗೆ ದಟ್ಟಣೆ ಹಾಗೂ ನಗರದಲ್ಲಿನ ನಾಗರೀಕರು ತಮ್ಮ ವಾಹನಗಳಿಗೆ ರಸ್ತೆ ಬಳಕೆಗೆ ತೆರಿಗೆಯನ್ನು ಪಾವತಿಸಿದ್ದರೆ, ಪಾರ್ಕಿಂಗ್ ಮಾಡುವ ಸೌಲಭ್ಯವನ್ನು ಒದಗಿಸುವ ಜವಾಬ್ದಾರಿಯನ್ನು ಪರಿಗಣಿಸದಿರಲು ಕಾರಣವೇನು?</td>
<td>
<ul>
<li>ಬೆಂಗಳೂರು ನಗರದಲ್ಲಿ ಸುಗಮ ಸಂಚಾರ ವ್ಯವಸ್ಥೆಯನ್ನು ಕಲ್ಪಿಸುವ ಮೂಲಕ ಸಂಚಾರ ದಟ್ಟಣೆಯನ್ನು ನೀಗಿಸಲು ತೆಗೆದುಕೊಳ್ಳಲಾದ ಕ್ರಮಗಳಲ್ಲಿ ವಾಹನಗಳ ನಿಲುಗಡೆ ನಿಷೇಧವೂ ಸಹ ಒಂದಾಗಿದೆ. ಈ ನಿಟ್ಟಿನಲ್ಲಿ ಪ್ರಮುಖ ರಸ್ತೆಗಳಾದ ಬಳ್ಳಾರಿ ರಸ್ತೆ, ಹಳೇ ಮದ್ರಾಸ್ ರಸ್ತೆ, ಹಳೇ ಏರ್‌ಪೋರ್ಟ್ ರಸ್ತೆ, ಸರ್ಜಾಪುರ ರಸ್ತೆ, ಹೊಸೂರು ರಸ್ತೆ, ಬನ್ನೇರುಘಟ್ಟ ರಸ್ತೆ, ಕನಕಪುರ ರಸ್ತೆ, ಮೈಸೂರು ರಸ್ತೆ, ಮಾಗಡಿ ರಸ್ತೆ, ತುಮಕೂರು ರಸ್ತೆ, ವೆಸ್ಟ್ ಆಫ್ ಕಾರ್ಡ್ ರಸ್ತೆ, ಹೊರವರ್ತುಲ ರಸ್ತೆಗಳಲ್ಲಿ ಆಯ್ದ ಬಹುತೇಕ ಭಾಗದ ರಸ್ತೆಗಳಲ್ಲಿ ರಸ್ತೆಯ ಎರಡೂ ಕಡೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.</li>
<li>ಇನ್ನುಳಿದ ಆರ್ಟೀರಿಯಲ್ ಮತ್ತು ಸಬ್‌ಆರ್ಟೀರಿಯಲ್ ರಸ್ತೆಗಳಲ್ಲಿ ವಾಹನಗಳ ನಿಲುಗಡೆಗೆ ವ್ಯವಸ್ಥೆಯನ್ನು ಈ ಕೆಳಕಂಡಂತೆ ಕಲ್ಪಿಸಲಾಗಿದೆ.</li>
</ul>
<table>
<tr><th>ಕ್ರ. ಸಂ</th><th>ವಿವಿಧ ವಾಹನಗಳು</th><th>ವಾಹನ ನಿಲುಗಡೆಗೆ ಕಲ್ಪಿಸಲಾದ ನಿಲ್ದಾಣಗಳ ಸಂಖ್ಯೆ</th></tr>
<tr><td>1</td><td>ಆಟೋರಿಕ್ಷಾಗಳು</td><td>461</td></tr>
<tr><td>2</td><td>ದ್ವಿಚಕ್ರ ವಾಹನಗಳು</td><td>141</td></tr>
<tr><td>3</td><td>ಲಘು ಮೋಟಾರು ವಾಹನಗಳು</td><td>112</td></tr>
<tr><td>4</td><td>ಅದಲು ಬದಲು ದಿನಗಳಲ್ಲಿ ವಾಹನ ನಿಲುಗಡೆಗೆ ವ್ಯವಸ್ಥೆ (ದ್ವಿಚಕ್ರ ಮತ್ತು ಲಘು ಮೋಟಾರು ವಾಹನಗಳು ಸೇರಿ)</td><td>57</td></tr>
</table>
</td>
</tr>
</table>

| | | |
|---|---|---|
| ಇ) | ಪಾರ್ಕಿಂಗ್ ಮತ್ತು ನೋ–ಪಾರ್ಕಿಂಗ್ ಫಲಕಗಳನ್ನು ಅಳವಡಿಸುವಲ್ಲಿ ಯಾವುದೇ ಮಾನದಂಡವನ್ನು ಉಪಯೋಗಿಸದೆ ಸಾರ್ವಜನಿಕರಿಗೆ ತೊಂದರೆಯನ್ನು ಉಂಟು ಮಾಡುತ್ತಿರುವ ಪೊಲೀಸ್ ಅಧಿಕಾರಿಗಳ ಮೇಲೆ ಶಿಸ್ತಿನ ಕ್ರಮವನ್ನು ಕೈಗೊಳ್ಳಲಾಗುವುದೇ; ಹಾಗೂ ಪಾರ್ಕಿಂಗ್ ವ್ಯವಸ್ಥೆಯನ್ನು ವೈಜ್ಞಾನಿಕವಾಗಿ ಸಾರ್ವಜನಿಕರ ಅನುಕೂಲತೆ, ವಾಹನದ ಸುಗಮ ಸಂಚಾರ, ಎರಡನ್ನು ಗಮನದಲ್ಲಿಟ್ಟುಕೊಂಡು ಯಾವ ರೀತಿ ಜಾರಿಗೆ ತರಲು ಕ್ರಮ ಕೈಗೊಳ್ಳಲಾಗುವುದು? | • ಪಾರ್ಕಿಂಗ್ ಮತ್ತು ನೋ–ಪಾರ್ಕಿಂಗ್ ಫಲಕಗಳನ್ನು ಅಳವಡಿಸುವಲ್ಲಿ ಯಾವುದೇ ಮಾನದಂಡವನ್ನು ಉಪಯೋಗಿಸದೆ ಸಾರ್ವಜನಿಕರಿಗೆ ತೊಂದರೆಯನ್ನು ಉಂಟು ಮಾಡುವ ಪೊಲೀಸ್ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುವುದು.<br>• ಪಾರ್ಕಿಂಗ್ ವ್ಯವಸ್ಥೆಯನ್ನು ವೈಜ್ಞಾನಿಕವಾಗಿ ಸಾರ್ವಜನಿಕರ ಅನುಕೂಲತೆ, ವಾಹನದ ಸುಗಮ ಸಂಚಾರ, ಎರಡನ್ನು ಗಮನದಲ್ಲಿಟ್ಟುಕೊಂಡು ಪಾರ್ಕಿಂಗ್ ಸೌಲಭ್ಯದ ವ್ಯವಸ್ಥೆಯನ್ನು ಮಾಡಲು ಕ್ರಮ ಕೈಗೊಳ್ಳಲಾಗಿದೆ. |

ಹೆಚ್‌ಡಿ 52 ಬೆಳಗಾವಿ 2018

(ಡಾ. ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ